ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 1, March-April 2024, Pp. 102-106
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಭಾರತದಲ್ಲಿ ಮೀಸಲಾತಿ ಹೆಚ್ಚಳ: ಸಾಧ್ಯತೆ ಮತ್ತು ಸವಾಲುಗಳು

**ಸುನಿಲ್ ಕುಮಾರ್**

ಉಪನ್ಯಾಸಕರು, ವಿಶ್ವವಿದ್ಯಾನಿಲಯ ಕಾಲೇಜು, ಮಂಗಳೂರು.

***Abstract:***

*ಭಾರತದಲ್ಲಿ ಸಾಮಾಜಿಕ ಸ್ವಾತಂತ್ರ್ಯವನ್ನು ಕುರಿತು ಚರ್ಚಿಸುವಾಗ ಮುನ್ನೆಲೆಗೆ ಬರುವ ಮೊದಲ ವಿಷಯ 'ಜಾತಿ ಪದ್ಧತಿ'. ಭಾರತೀಯ ಸಮಾಜದಲ್ಲಿ ಆಳವಾಗಿ ಬೇರೂರಿರುವ ಜಾತಿ ಪದ್ಧತಿಯಿಂದಾಗಿ ತಳ ಸಮುದಾಯಗಳು ಸಾವಿರಾರು ವರ್ಷಗಳಿಂದ ಶೋಷಣೆಗೆ ಒಳಗಾಗಿವೆ. ಜ್ಯೋತಿ ಭಾಪುಲೆ, ಶಾಹು ಮಹಾರಾಜ್, ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರ್, ಡಾ. ಬಿ.ಆರ್.ಅಂಬೇಡ್ಕರ್, ಮಹಾತ್ಮ ಗಾಂಧೀಜಿಯವರ ಪ್ರಯತ್ನದ ಫಲವಾಗಿ ತುಳಿತಕ್ಕೊಳಗಾದ ಸಮುದಾಯಗಳಿಗೆ ಮೀಸಲಾತಿ ದೊರಕಿತು. ಮೀಸಲಾತಿ ಮೂಲಕ ಎಲ್ಲಾ ಸಮುದಾಯಗಳಿಗೂ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಹೀಗೆ ಎಲ್ಲಾ ಕ್ಷೇತ್ರಗಳಲ್ಲೂ ಸಮಾನ ಅವಕಾಶ ಮತ್ತು ಪ್ರಾತಿನಿಧ್ಯತೆ ದೊರಕುವಂತಾಯಿತು. ಕೇಂದ್ರ ಹಾಗೂ ರಾಜ್ಯ ಸರಕಾರಗಳು ಶಿಕ್ಷಣ, ರಾಜಕೀಯ ಹಾಗೂ ಸರ್ಕಾರಿ ಉದ್ಯೋಗಗಳಲ್ಲಿ ಒಬಿಸಿ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಸಮುದಾಯಗಳಿಗೆ ಮೀಸಲಾತಿಯನ್ನು ಕಲ್ಪಿಸಿ ಶೋಷಿತ ಸಮುದಾಯಗಳಿಗೆ ಸಾಮಾಜಿಕ, ಆರ್ಥಿಕ ಭದ್ರತೆಯನ್ನು ಒದಗಿಸಿದವು. ಹಾಗೂ ನ್ಯಾಯಾಂಗವು ಸಹ ಕೆಲವು ಷರತ್ತುಗಳೊಂದಿಗೆ ಮೀಸಲಾತಿ ನೀತಿಗೆ ಮನ್ನಣೆಯನ್ನು ನೀಡಿದೆ ಹಾಗೂ ಆರ್ಥಿಕವಾಗಿ ಹಿಂದುಳಿದಿರುವ ಮೇಲ್ವರ್ಗದ (ಬ್ರಾಹ್ಮಣ, ಬನಿಯಾ ಇತ್ಯಾದಿ) ಸಮುದಾಯಗಳಿಗೂ ಕೂಡ ಶೇ.10 ರಷ್ಟು ಮೀಸಲಾತಿಯನ್ನು ನೀಡಲಾಗಿದೆ. ಇದಲ್ಲದೆ ಇತ್ತೀಚಿನ ದಿನಗಳಲ್ಲಿ ಅನೇಕ ಸಮುದಾಯಗಳು ಪ.ಜಾತಿ ಮತ್ತು ವರ್ಗಗಳಿಗೆ ಸೇರಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸುತ್ತಿವೆ. ಈ ಹಿನ್ನೆಲೆಯಲ್ಲಿ ಸರ್ಕಾರ ನಿಗದಿ ಪಡಿಸಿರುವ ಶೇ.50 ಕ್ಕಿಂತ ಹೆಚ್ಚು ಮೀಸಲಾತಿ ನೀಡಬಹುದೇ ಎಂಬುದನ್ನು ಈ ಲೇಖನದಲ್ಲಿ ಚರ್ಚಿಸಲಾಗಿದೆ.*

***Keywords:*** *ಜಾತಿ ಪದ್ಧತಿ, ಮೀಸಲಾತಿ, ಶೋಷಿತ ಸಮುದಾಯ, ಹಿಂದುಳಿದ ಸಮುದಾಯ, ಸಾಮಾಜಿಕ ಪ್ರಾತಿನಿಧ್ಯತೆ.*

**ಪೀಠಿಕೆ**

ಭಾರತದಲ್ಲಿ ಹಿಂದುಳಿದ (ಒಬಿಸಿ), ಎಸ್‌ಸಿ, ಎಎಸ್ಟಿ, ಮಹಿಳೆಯರು, ಧಾರ್ಮಿಕ ಅಲ್ಪಸಂಖ್ಯಾತರು, ಹಾಗೂ ಆರ್ಥಿಕವಾಗಿ ಹಿಂದುಳಿದಿರುವ ಮೇಲ್ವರ್ಗದವರಿಗೆ ನೀಡಿರುವ 'ಮೀಸಲಾತಿ' ನಿರಂತರ ಚರ್ಚೆಗೆ ಒಳಪಡುವ ವಿಷಯವಾಗಿದೆ. ಚಾತುರ್ವರ್ಣ (ವರ್ಣಾಶ್ರಮ ಪದ್ಧತಿ) ವ್ಯವಸ್ಥೆಯಿಂದ ಭಾರತೀಯ ಸಮಾಜವು ರಚನೆಗೊಂಡಿದೆ. ಈ ಸಮಾಜದಲ್ಲಿ ಮೇಲ್ವರ್ಗದವರಿಂದ ಕೆಳವರ್ಗದವರು ನಿರಂತರ ಶೋಷಣೆಗೆ ಗುರಿಯಾಗಿ ಎಲ್ಲಾ ರೀತಿಯ ಅವಕಾಶಗಳಿಂದ ವಂಚಿತರಾದರು. ಹೀಗೆ ಅವಕಾಶಗಳಿಂದ ವಂಚಿತಗೊಂಡ ಸಮುದಾಯಗಳಿಗೆ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಸಮಾನ

***Please cite this article as:*** ಸುನಿಲ್ ಕುಮಾರ್. (2024). ಭಾರತದಲ್ಲಿ ಮೀಸಲಾತಿ ಹೆಚ್ಚಳ: ಸಾಧ್ಯತೆ ಮತ್ತು ಸವಾಲುಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(1), 102–106.

ಪ್ರಾತಿನಿಧ್ಯತೆ ಕಲ್ಪಿಸಲು ಮೀಸಲಾತಿಯನ್ನು ನೀಡಲಾಯಿತು.

ಹಿಂದೂ ಧರ್ಮದ ಧಾರ್ಮಿಕ ಗ್ರಂಥಗಳಾದ ಋಗ್ವೇದಾ, ಮನುಸ್ಮೃತಿಯಲ್ಲಿ ಉಲ್ಲೇಖಿಸಿದಂತೆ ಜಾತಿಗಳು ವರ್ಣಾಶ್ರಮದಿಂದ ಹುಟ್ಟುಕೊಂಡಿತು ಎಂದು ಹೇಳಲಾಗಿದೆ. ಅಂದರೆ ಬ್ರಹ್ಮನ ತಲೆಯಿಂದ ಬ್ರಾಹ್ಮಣ, ಭುಜದಿಂದ ಕ್ಷತ್ರಿಯ, ತೊಡೆಯಿಂದ ವೈಶ್ಯ ಹಾಗೂ ಪಾದದಿಂದ ಶೂದ್ರ ಜನಿಸಿದನು ಎಂಬ ಕಲ್ಪಿತ ಸಿದ್ಧಾಂತವನ್ನು ಸಮಾಜದಲ್ಲಿ ಹರಡಲಾಗಿದೆ. ಈ ವ್ಯವಸ್ಥೆಯನ್ನು ಒಪ್ಪದವರು ಕ್ರಮೇಣ ಅಸ್ಪೃಶ್ಯರಾಗಿ ಪಂಚಮರಾದರು. ಈ ಅಸ್ಪೃಶ್ಯರು ಹಾಗೂ ಶೂದ್ರರನ್ನು ಸಾವಿರಾರು ವರ್ಷಗಳ ಕಾಲ ಎಲ್ಲಾ ರೀತಿಯ ಅಧಿಕಾರ, ಅಕ್ಷರದಿಂದ ವಂಚಿಸಲಾಯಿತು. ಅಸ್ಪೃಶ್ಯರನ್ನು ಊರ ಹೊರಗಿಟ್ಟು ಪಶುಗಳಿಗಿಂತಲೂ ಕೀಳಾಗಿ ನಡೆಸಿಕೊಳ್ಳಲಾಯಿತು. ಇಂತಹ ಸಮುದಾಯಗಳಿಗಾದ ಐತಿಹಾಸಿಕ ಅನ್ಯಾಯವನ್ನು ಸರಿಪಡಿಸುವುದಕ್ಕೆ ಮೀಸಲಾತಿ ಅಗತ್ಯವಾಗಿತ್ತು.

ಬ್ರಿಟಿಷರ ಕಾಲದಲ್ಲಿ ಶೋಷಿತ ಸಮುದಾಯದ ಹಕ್ಕುಗಳು ಮುನ್ನೆಲೆಗೆ ಬಂದವು. ಈ ಸಮುದಾಯಗಳಿಗೆ ಸಾಮಾಜಿಕ ನ್ಯಾಯ ಒದಗಿಸಲು ಮೀಸಲಾತಿ ಅನುಕೂಲವಾಯಿತು. ಭಾರತದಲ್ಲಿ ಈ ಪರಿಕಲ್ಪನೆಗೆ ಮೊದಲಿಗೆ ಬೀಜ ಬಿತ್ತಿದವರು ಲಾರ್ಡ್ ವಿಲಿಯಂ ಬೆಂಟಿಂಕ್ ಹಾಗೂ ಜ್ಯೋತಿಬಾ ಫುಲೆಯವರು. ಮೊಟ್ಟಮೊದಲ ಬಾರಿಗೆ ಸೊಲ್ಲಾಪುರದ ಶಾಹು ಮಹಾರಾಜರು ಹಿಂದುಳಿದ ವರ್ಗಗಳಿಗೆ ಸರ್ಕಾರಿ ಉದ್ಯೋಗಗಳಲ್ಲಿ ಶೆ.50 ರಷ್ಟು ಮೀಸಲಾತಿಯನ್ನು ನೀಡಿದರು.

ಡಾ.ಬಿ.ಆರ್.ಅಂಬೇಡ್ಕರ್‌ರವರು ಮೀಸಲಾತಿ ಕಾಯ್ದೆಗಳನ್ನು ರೂಪಿಸಬೇಕು ಹಾಗೂ ಶೋಷಿತ ಸಮುದಾಯಗಳಿಗೆ ಪ್ರತ್ಯೇಕ ರಾಜಕೀಯ ಪ್ರಾತಿನಿಧ್ಯತೆಯನ್ನು ನೀಡಬೇಕೆಂದು ಬ್ರಿಟಿಷರನ್ನು ಒತ್ತಾಯಿಸಿದರು. ಅದರ ಫಲವಾಗಿ 1909 ಹಾಗೂ 1919 ರ ಭಾರತೀಯ ಸರ್ಕಾರಿ ಕಾಯ್ದೆ, ಹಾಗೂ 1931, 1932 ರಲ್ಲಿ ಜರುಗಿದ ದುಂಡು ಮೇಜಿನ ಸಮ್ಮೇಳನದಲ್ಲಿ ಕೈಗೊಂಡ ನಿರ್ಣಯದಂತೆ ಅಂದಿನ ಬ್ರಿಟಿಷ್ ಪ್ರಧಾನಿಯಾಗಿದ್ದ ರಾಮ್ಸೆ ಮ್ಯಾಕ್‌ಡೋನಾಲ್ಡ್ ಜಾತಿ ಆಧಾರಿತ ಮೀಸಲಾತಿ ಪದ್ಧತಿಯನ್ನು ಜಾರಿಗೊಳಿಸಿದರು. ಸಿಖ್, ಕ್ರಿಶ್ಚಿಯನ್, ಮುಸ್ಲಿಂ ಹಾಗೂ ಹಿಂದೂ ಧರ್ಮದ ಶೋಷಿತ ಸಮುದಾಯದಗಳಿಗೆ ಮೀಸಲಾತಿ ನೀಡಿದರು. ಆದರೆ ಹಿಂದೂ ಧರ್ಮವನ್ನು ಒಡೆಯುವ ಪ್ರಯತ್ನವೆಂದು ಮೀಸಲಾತಿ ವ್ಯವಸ್ಥೆಯನ್ನು ವಿರೋಧಿಸಿ ಗಾಂಧೀಜಿಯವರು ಪೂನಾದ ಯರವಾಡ ಜೈಲಿನಲ್ಲಿ 1932ರಲ್ಲಿ ಉಪವಾಸ ಕೈಗೊಂಡರು.

ಗಾಂಧೀಜಿಯವರ ಹಠದಿಂದಾಗಿ ಯರವಾಡ ಜೈಲಿನಲ್ಲಿ ಅಂಬೇಡ್ಕರ್ ಗಾಂಧೀಜಿಯರವನ್ನು ಬೇಟಿಯಾಗಿ ಶೋಷಿತ ಸಮುದಾಯಗಳಿ ಪ್ರತ್ಯೇಕ ರಾಜಕೀಯ ಪ್ರಾತಿನಿಧ್ಯದ ಬದಲಿಗೆ ವಿಶೇಷ ಮೀಸಲಾತಿಯನ್ನು ನೀಡುವುದರ ಕುರಿತು ಒಪ್ಪಂದವನ್ನು ಮಾಡಿಕೊಳ್ಳಲಾಯಿತು. ತರುವಾಯ ಸಂವಿಧಾನ ರಚನಾ ಸಭೆಯಲ್ಲಿ ಮೀಸಲಾತಿ ಕುರಿತು ಸುದೀರ್ಘ ಚರ್ಚೆಯಾಗಿ ಸಂವಿಧಾನದಲ್ಲಿ ಹಿಂದುಳಿದವರಿಗೆ ವಿಶೇಷ ಆದ್ಯತೆ ನೀಡಲು ಒಪ್ಪಿಕೊಳ್ಳಲಾಯಿತು. ಸಂವಿಧಾನದಡಿಯಲ್ಲಿಯೇ ಮೀಸಲಾತಿಯನ್ನು ಪ್ರತಿಪಾದಿಸಲು ಹಲವಾರು ವಿಧಿಗಳನ್ನು ಸೇರಿಸಲಾಯಿತು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಭಾಗ XVI ಕೇಂದ್ರ, ರಾಜ್ಯ ಹಾಗೂ ಕೇಂದ್ರಾಡಳಿತ ಪ್ರದೇಶಗಳಲ್ಲಿ ಶಾಸಕಾಂಗದಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಹಾಗೂ ಹಿಂದುಳಿದಿರುವ (ಒಬಿಸಿ) ಸಮುದಾಯಗಳಿಗೆ ನಿರ್ದಿಷ್ಟ ಸ್ಥಾನಗಳು ಮೀಸಲಿಡುವುದು. ವಿಧಿ 330 ಲೋಕಸಭೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ನಿರ್ದಿಷ್ಟ ಸ್ಥಾನ ಮೀಸಲಿಡುವುದು. 332ನೇ ವಿಧಿಯಡಿ ರಾಜ್ಯಗಳ ಶಾಸಕಾಂಗಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಸ್ಥಾನಗಳನ್ನು ಮೀಸಲಿಡುವುದು. 343 (ಡಿ) ವಿಧಿಯಡಿ ಪಂಚಾಯತ್‌ಗಳಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಹಾಗೂ ಹಿಂದುಳಿದಿರುವ

(ಒಬಿಸಿ) ಸಮುದಾಯಗಳಿಗೆ ಮೀಸಲಾತಿಯನ್ನು ನೀಡುವುದು. 343 (ಟಿ) ಮುನ್ಸಿಪಾಲಿಟಿಯಲ್ಲಿ ಸ್ಥಾನಗಳನ್ನು ಮೀಸಲಿಡುವುದು. 16(4)ನೇ ವಿಧಿಯಂತೆ ಸರ್ಕಾರಿ ಹುದ್ದೆಯಲ್ಲಿ ಮೀಸಲಾತಿಯನ್ನು ನೀಡುವುದಾಗಿದೆ. ಹೀಗೆ ಸಂವಿಧಾನದ ಹತ್ತು ಹಲವು ವಿಧಿಗಳ ಮೂಲಕ ವಿವಿಧ ಕ್ಷೇತ್ರಗಳಿಗೆ ಅನ್ವಯವಾಗುವಂತೆ ಮೀಸಲಾತಿಯನ್ನು ಕಲ್ಪಿಸಲಾಗಿದೆ.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಜಾತಿಗಳ ಮಧ್ಯ ಮೀಸಲಾತಿಯನ್ನು ವರ್ಗೀಕರಿಸಲು ಕೇಂದ್ರ ಹಾಗೂ ರಾಜ್ಯಗಳಿಂದ ಹಲವಾರು ಸಮಿತಿಗಳನ್ನು ನೇಮಿಸಲಾಯಿತು. ಆ ಸಮಿತಿಗಳಲ್ಲಿ ಮಂಡಲ್ ಆಯೋಗ ಅತ್ಯಂತ ಪ್ರಮುಖವಾದದ್ದು. 1979ರಲ್ಲಿ ಅಂದಿನ ಪ್ರಧಾನಿಯಾಗಿದ್ದ ಮೊರಾರ್ಜಿ ದೇಸಾಯಿಯವರು 340ನೇ ವಿಧಿಯಡಿ ಹಿಂದುಳಿದ ವರ್ಗಗಳ ಆರ್ಥಿಕ ಹಾಗೂ ಶೈಕ್ಷಣಿಕ ಸ್ಥಿತಿಗತಿ ತಿಳಿಸಲು ಬಿ.ಪಿ.ಮಂಡಲ್‌ರವರ ನೇತೃತ್ವದಲ್ಲಿ ಆಯೋಗವೊಂದನ್ನು ರಚಿಸಿದರು. ಈ ಸಮಿತಿಯು ಸಮಗ್ರವಾಗಿ ಅಧ್ಯಯನವನ್ನು ಮಾಡಿ ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು.

ಈ ಸಮಿತಿಯ ಅನೇಕ ಪ್ರಮುಖ ಶಿಫಾರಸ್ಸುಗಳನ್ನು ನೀಡಿತು. ಅವುಗಳೆಂದರೆ ರಾಷ್ಟ್ರದ ಒಟ್ಟು ಜನಸಂಖ್ಯೆಯಲ್ಲಿ ಶೇ.50 ರಷ್ಟು ಹಿಂದುಳಿದ (ಒಬಿಸಿ) ಗಳಿದ್ದಾರೆ ಅವರಿಗೆ ಸರ್ಕಾರಿ ಉದ್ಯೋಗದಲ್ಲಿ ಶೇ.27 ರಷ್ಟು ಮೀಸಲಾತಿಯನ್ನು ನೀಡಬೇಕು. ಈ ಸಮಿತಿಯು ಒಬಿಸಿ ಪಟ್ಟಿಗೆ 3700 ಜಾತಿಗಳು ಹಾಗೂ ಅತಿ ಹಿಂದುಳಿದ ಜಾತಿ ಪಟ್ಟಿಗೆ 2100 ಜಾತಿಗಳನ್ನು ಸೇರಿಸಿತು. 10 ವರ್ಷಗಳ ತರುವಾಯ 1990 ರಲ್ಲಿ ಪಿ.ವಿ. ನರಸಿಂಹರಾವ್ ನೇತೃತ್ವದ ಕೇಂದ್ರ ಸರ್ಕಾರ ಬಿ.ಪಿ.ಮಂಡಲ್ ಆಯೋಗದ ಶಿಫಾರಸ್ಸಿನಂತೆ ಹಿಂದುಳಿದ ವರ್ಗಗಳಿಗೆ ಶೇ.27, ಪರಿಶಿಷ್ಟ ಜಾತಿಗಳಿಗೆ ಶೇ.15 ಹಾಗೂ ಪರಿಶಿಷ್ಟ ಪಂಗಡಗಳಿಗೆ ಶೇ.7.5 ರಷ್ಟು ಶಿಕ್ಷಣ ಹಾಗೂ ಸರ್ಕಾರಿ ಉದ್ಯೋಗಗಳಲ್ಲಿ ಮೀಸಲಾತಿಯನ್ನು ನೀಡಬೇಕೆಂದು ವರ್ಗೀಕರಿಸಲಾಯಿತು ಹಾಗೂ 2001ರ ಜನಗಣತಿಯನ್ನು ಆದರಿಸಿ ಡಿಲಿಮಿಟೇಷನ್ ಆಯೋಗವು ಲೋಕಸಭೆಯಲ್ಲಿ ಪರಿಶಿಷ್ಟ ಜಾತಿಯವರಿಗೆ 545 ಲೋಕಸಭಾ ಸ್ಥಾನಗಳಲ್ಲಿ 84 ಹಾಗೂ ಪರಿಶಿಷ್ಟ ವರ್ಗಗಳಿಗೆ 47 ಸ್ಥಾನಗಳನ್ನು ಮೀಸಲಿರಿಸಿತು. ಮಂಡಲ್ ಆಯೋಗದ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸಿದ ಕೇಂದ್ರ ಸರ್ಕಾರದ ಕ್ರಮದ ವಿರುದ್ಧ ಸುಪ್ರಿಂ ಕೋರ್ಟ್‌ನಲ್ಲಿ ಹಲವಾರು ಜನರು "ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು" ಸಲ್ಲಿಸಿದರು ಮುಂದೆ ಈ ಪ್ರಕರಣವನ್ನು ಇಂದಿರಾ ಸಾಹ್ನಿ ಪ್ರಕರಣ ಎಂದು ಕರೆಯಲಾಯಿತು.

ಒಂಭತ್ತು ಜನ ನ್ಯಾಯಾಧೀಶರಿದ್ದ ಸಂವಿಧಾನಪೀಠವು ಒಂದು ವರ್ಷದವರೆಗೂ ವಾದ ಪ್ರತಿವಾದಗಳನ್ನು ಆಲಿಸಿ, 1992 ರಲ್ಲಿ ಮಹತ್ವದ ತೀರ್ಪನ್ನು ನೀಡಿತ್ತು ಈ ತೀರ್ಪು ಇಂದಿಗೂ ಒಂದು ಮೈಲಿಗಲ್ಲಾಗಿದೆ. 6:3 ಬಹುಮತದೊಂದಿಗೆ ಮೀಸಲಾತಿ ಶೇ.50 ರಷ್ಟು ಮೀರುವಂತಿಲ್ಲ ಎಂಬ ನಿಯಮವನ್ನು ರೂಪಿಸಿತು. ಅತಿ ಅವಶ್ಯಕತೆಯೆನಿಸಿದಾಗ ಅಥವಾ ಅಗತ್ಯ ಬಿದ್ದಾಗ ಶೇ.50 ಕ್ಕಿಂತ ಹೆಚ್ಚು ಮೀಸಲಾತಿಯನ್ನು ನೀಡಬಹುದು. ಆದರೆ ಅದಕ್ಕೆ ಸಮರ್ಥವಾದ ಸಮರ್ಥನೆಯನ್ನು ನೀಡಬೇಕಾಗುತ್ತದೆ ಎಂಬ ತೀರ್ಪನ್ನು ನೀಡಿತು.

ನಂತರ ಹಲವು ರಾಜ್ಯಗಳು ಅದರಲ್ಲೂ ತೆಲಂಗಾಣ, ಮಹರಾಷ್ಟ್ರದಂತಹ ರಾಜ್ಯಗಳು ಶೇ.50 ಕ್ಕಿಂತ ಹೆಚ್ಚು ಮೀಸಲಾತಿಯನ್ನು ನೀಡಿದ್ದವು ಆದರೆ ಅವು ಜಾರಿಗೆ ಬಂದಿಲ್ಲ. ಆದರೆ ತಮಿಳುನಾಡು ಸರ್ಕಾರ ಶೇ.69 ರಷ್ಟು ಮೀಸಲಾತಿಯನ್ನು ಜಾರಿಗೊಳಿಸಿದೆ. ತಮಿಳುನಾಡು ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಹಾಗೂ ಹಿಂದುಳಿದಿರುವ (ಒಬಿಸಿ) ಸಮುದಾಯಗಳಿಗೆ (ಶಿಕ್ಷಣ ಹಾಗೂ ಸರ್ಕಾರಿ ಉದ್ಯೋಗಗಳಲ್ಲಿ ಮೀಸಲಾತಿ) ಕಾಯಿದೆ 1993 ಯನ್ನು ಪರಿಚಯಿಸಿ ಅಂದಿನ ಕೇಂದ್ರ ಸರ್ಕಾರದ ಮೇಲೆ ಒತ್ತಡ ಹೇರಿ ಸಂವಿಧಾನದ ಭಾಗ IX ಗೆ ಸೇರಿಸುವಂತೆ ಮಾಡಿತು.

ಭಾಗ IX ರಲ್ಲಿ ಬರುವ ವಿಷಯಗಳನ್ನು ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿಲ್ಲ. ಅದಾಗ್ಯೂ

Coelho ಪ್ರಕರಣದಲ್ಲಿ ಸುಪ್ರಿಂಕೋರ್ಟ್ ಸಂವಿಧಾನದ ಮೂಲರಚನೆಗೆ ದಕ್ಕೆಯಾಗುವ ಯಾವುದೇ ಕಾಯಿದೆಗಳನ್ನು ನ್ಯಾಯಾಂಗದ ಮರುಪರಿಶೀಲನೆಗೆ ಒಳಪಡುತ್ತದೆ ಎಂದು ತೀರ್ಪನ್ನು ನೀಡಿತು.

**ಮೀಸಲಾತಿಗೆ ಸಂಬಂಧಿಸಿದಂತೆ ನ್ಯಾಯಾಲಯದ ಇತರ ಪ್ರಮುಖ ತೀರ್ಪುಗಳು**

**ಮದ್ರಾಸ್ ಸರ್ಕಾರ ವರ್ಸಸ್ ಚಂಪಕಂ ದೊರೆಚಾನ್ ಪ್ರಕರಣ–1951:** ಎಸ್‌ಸಿ ಎಸ್ಟಿ ಸಮುದಾಯಗಳಿಗೆ ವೈದ್ಯಕೀಯ ಹಾಗೂ ತಾಂತ್ರಿಕ ಶಿಕ್ಷಣದಲ್ಲಿ ನೀಡಿದ ಮೀಸಲಾತಿಯನ್ನು ನ್ಯಾಯಾಲಯದಲ್ಲಿ ಪ್ರಶ್ನಿಸಲಾಯಿತು. ಸುಪ್ರಿಂಕೋರ್ಟ್ ಈ ಮೀಸಲಾತಿಯನ್ನು ಎತ್ತಿ ಹಿಡಿಯಿತು, ಮತ್ತು ದೇಶದ ಮೊಟ್ಟಮೊದಲ ಮೀಸಲಾತಿಯ ಕುರಿತು ತೀರ್ಪಾಗಿ ದಾಖಲಾಯಿತು. ಜೊತೆಗೆ ಈ ಪ್ರಕರಣ ಸಂವಿಧಾನದ ಮೊದಲ ತಿದ್ದುಪಡಿಗೆ ದಾರಿಮಾಡಿಕೊಟ್ಟಿತು.

**ಬಾಲಾಜಿ ವರ್ಸಸ್ ಮೈಸೂರು ಸರ್ಕಾರ ಪ್ರಕರಣ**

1962ರಲ್ಲಿ ಮೈಸೂರು ಸರ್ಕಾರ ರಾಜ್ಯದಲ್ಲಿ ಹಿಂದುಳಿದ ಹಾಗೂ ಅತೀ ಹಿಂದುಳಿದ ವರ್ಗಗಳಿಗೆ ಶಿಕ್ಷಣ ಹಾಗೂ ಸರ್ಕಾರಿ ಹುದ್ದೆಯಲ್ಲಿ ಶೇ.66 ರಷ್ಟು ಮೀಸಲಾತಿ ನೀಡುವ ಕಾಯಿದೆಯನ್ನು ಜಾರಿಗೊಳಿಸಿತು. ಇದನ್ನು ಪ್ರಶ್ನಿಸಿ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಲಾಯಿತು. ಈ ಕಾಯಿದೆಯನ್ನು ಅಂದಿನ ಮೈಸೂರು ಹೈಕೋರ್ಟ್ (ಈಗಿನ ಕರ್ನಾಟಕ ಹೈಕೋರ್ಟ್) ರದ್ದುಗೊಳಿಸಲಾಯಿತು.

**ಜನಹಿತ ಅಭಿಯಾನ ವರ್ಸಸ್ ಕೇಂದ್ರ ಸರ್ಕಾರ**

2019ರಲ್ಲಿ ಕೇಂದ್ರ ಸರ್ಕಾರ ಸಂವಿಧಾನಕ್ಕೆ 103ನೇ ತಿದ್ದುಪಡಿಯನ್ನು ತರುವ ಮೂಲಕ ಆರ್ಥಿಕವಾಗಿ ಹಿಂದುಳಿದ ವರ್ಗಗಳಿಗೆ ಶೇ.10 ರಷ್ಟು ಮೀಸಲಾತಿಯನ್ನು ನೀಡಿತು. ಈ ಕಾಯಿದೆಯ ವಿರುದ್ಧ ಹಲವಾರು ಜನರು ಸುಪ್ರಿಂಕೋರ್ಟ್‌ನಲ್ಲಿ ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ಸಲ್ಲಿಸಿದರು. ಐದು ಜನ ನ್ಯಾಯಾದೀಶರಿದ್ದ ಸಂವಿಧಾನ ಪೀಠವು 3:2 ಬಹುಮತದೊಂದಿಗೆ ಆರ್ಥಿಕವಾಗಿ ಹಿಂದುಳಿದ ಮೇಲ್ವರ್ಗಗಳಿಗೆ ನೀಡಿರುವ ಮೀಸಲಾತಿಯು ಸಂವಿಧಾನಬದ್ಧವಾಗಿದೆ ಹಾಗೂ ಶೇ.50 ರಷ್ಟು ಮೀಸಲಾತಿ ನೀಡಬಾರದು ಎಂಬ ಪರಿವ್ಯಾಪ್ತಿಗೆ ಬರುವುದಿಲ್ಲ ಜೊತೆಗೆ ಈ ನಿಯಮವು ಕೇವಲ ಎಸ್‌ಸಿ ಎಸ್ಟಿ ಹಾಗೂ ಒಬಿಸಿಗಳಿಗೆ ಮಾತ್ರ ಅನ್ವಯಿಸುತ್ತದೆ ಎಂದು ತೀರ್ಪನ್ನು ನೀಡಿತು.

**ಸಮಾರೋಪ**

ಅಸಮಾನ ಸಾಮಾಜಿಕ ವ್ಯವಸ್ಥೆಯ ಭಾರತದಲ್ಲಿ ಸಮಾನತೆಗಾಗಿ ಮೀಸಲಾತಿ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು. ಜಾರಿಗೆ ಬಂದು ಏಳು ದಶಕಗಳು ಕಳೆದರೂ ಕೂಡ ಜಾತಿ ಜಾತಿಗಳ ನಡುವಿನ ಕಂದಕ ಹೆಚ್ಚುತ್ತಿದೆ. ಎಲ್ಲಾ ರಾಜಕೀಯ ಪಕ್ಷಗಳು ರಾಜಕೀಯ ಲಾಭಕ್ಕಾಗಿ ಮೀಸಲಾತಿಯನ್ನೇ ಬಂಡವಾಳ ಮಾಡಿಕೊಂಡಿವೆ. ಸಾಮಾಜಿಕ ನ್ಯಾಯದ ಭಾಗವಾಗಬೇಕಾಗಿದ್ದ ಮೀಸಲಾತಿ ವಿವಾದದ ಭಾಗವಾಗಿದ್ದು ವಿಪರ್ಯಾಸವಾಗಿದೆ. ಕೇವಲ ಎಸ್‌ಸಿ ಎಸ್ಟಿ ಸಮುದಾಯಗಳಿಗೆ ಮಾತ್ರ ಮೀಸಲಾತಿ ವ್ಯವಸ್ಥೆಯಿದ್ದು ಇದರಿಂದ ಸಾಮಾಜಿಕ ಅಸಮಾನತೆ ಇನ್ನೂ ಹೆಚ್ಚುತ್ತಿದೆ ಎಂಬ ತಪ್ಪು ಕಲ್ಪನೆ ಇಂದಿನ ಸಮುದಾಯಗಳಲ್ಲಿ ಅದರಲ್ಲೂ ಸ್ವತಃ ಮೀಸಲಾತಿ ಪಡೆದುಕೊಳ್ಳುವ ಹಿಂದುಳಿದ (ಒಬಿಸಿ) ಮತ್ತು ಮೇಲ್ವರ್ಗದ ಸಮುದಾಯಗಳಲ್ಲಿ ಮನೆ ಮಾಡಿರುವುದು ದುರ್ದೈವದ ಸಂಗತಿಯಾಗಿದೆ. ಇತ್ತೀಚಿನ ದಿನಗಳಲ್ಲಿ ಸಾಮಾಜಿಕವಾಗಿ ಉತ್ತಮ ಸ್ಥರದಲ್ಲಿದ್ದು ಆರ್ಥಿಕವಾಗಿ ಹಿಂದುಳಿದಿರುವ ಸಮುದಾಯಗಳು ಕೂಡ ಎಸ್‌ಸಿ ಎಸ್ಟಿ ಪಟ್ಟಿಗೆ ಸೇರಿಸುವಂತೆ ಹೆಚ್ಚೆಚ್ಚು ಬೇಡಿಕೆಯಿಡುತ್ತಿರುವುದು ಮೀಸಲಾತಿ ಉದ್ದೇಶವನ್ನೇ ಬುಡಮೇಲು ಮಾಡುವಂತಿದೆ. ಈ ಹಿನ್ನೆಲೆಯಲ್ಲಿ ಸಮಾಜದ ನಡುವೆ ಮೀಸಲಾತಿ ಬಗ್ಗೆ ಜ್ಞಾನವನ್ನು ತುಂಬುವುದು ಅಗತ್ಯವಾಗಿದೆ.

## ಪರಾಮರ್ಶನ ಗ್ರಂಥಗಳು


- ಮೋಹನ್, ಎಚ್.ಎಸ್. (2013). *ನ್ಯಾಯಾಲಯದ ತೀರ್ಪುಗಳು ಮತ್ತು ಕಾನೂನಿನ ಅರಿವು.*
- ನಾಗಮೋಹನದಾಸ್, ಎಚ್.ಎನ್. (2022). ಮೀಸಲಾತಿ ಭ್ರಮೆ ಮತ್ತು ವಾಸ್ತವ. ಜನ ಪ್ರಕಾಶನ.
- ಪೋತೆ ಮತ್ತು ಜಗನ್ನಾಥ್ ಶಿಂಧೆ. (2006). *ಮೀಸಲಾತಿ ಸಮಸ್ಯೆ ಮತ್ತು ಸವಾಲುಗಳು.*
- Divya Tivari. (2007). *Ethics of Reservation*. Book age publications.
- Laxmikanth (2023) *Indian Polity*. (7th Ed.). MC Grow Hill publications.
- *Report of the backward classes commission. First Part, Vol-1&2.* (1980). Government of India.
- *Supreme Court of India*. (n.d.). https://main.sci.gov.in/